# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 793

ಉತ್ತರಿಸಬೇಕಾದ ದಿನಾಂಕ : 25.09.2020.

ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಕ್ರೀಡಾ ವಸತಿ ನಿಲಯಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 34 ಕ್ರೀಡಾ ವಸತಿ ಶಾಲೆ/ನಿಲಯಗಳಿವೆ. ವಿವರವನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಆ | ಕಳೆದ ಸಾಲಿನಲ್ಲಿ ವಸತಿ ನಿಲಯಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿ/ವಿದ್ಯಾರ್ಥಿನಿಯರ ಸಂಖ್ಯೆ ಎಷ್ಟು; | 2019-20 ನೇ ಸಾಲಿನಲ್ಲಿ ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ 1461 ಬಾಲಕರು/ಪುರುಷರು ಹಾಗೂ 681 ಬಾಲಕಿಯರು/ಮಹಿಳೆಯರು ಸೇರಿದಂತೆ ಒಟ್ಟು 2142 ಕ್ರೀಡಾಪಟುಗಳಿಗೆ ಪ್ರವೇಶ ನೀಡಲಾಗಿದೆ. |
| ಇ | ಸದರಿ ವಸತಿ ನಿಲಯಗಳಲ್ಲಿ ಯಾವ ತರಗತಿಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುವುದು; | ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ 5ನೇ ತರಗತಿ, 8ನೇ ತರಗತಿ ಹಾಗೂ ಪ್ರಥಮ ಪಿ.ಯು.ಸಿ. ಹಂತಗಳಲ್ಲಿ ಆಯ್ಕೆ ಪ್ರಕ್ರಿಯೆ ಮೂಲಕ ಪ್ರವೇಶ ನೀಡಲಾಗುವುದು. ಅತ್ಯುತ್ತಮ ಕ್ರೀಡಾ ಸಾಧನೆ ದಾಖಲಿಸಿದ ಕ್ರೀಡಾಪಟುಗಳಿಗೆ ಯಾವುದೇ ತರಗತಿಗೆ ನೇರ ಪ್ರವೇಶ ಸೌಲಭ್ಯ ಕಲ್ಪಿಸಲಾಗುವುದು. |
| ಈ | ಕಳೆದ ಸಾಲಿನಲ್ಲಿ ಸದರಿ ವಸತಿ ನಿಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ತರಬೇತುದಾರರ ಮತ್ತು ಗುತ್ತಿಗೆ ತರಬೇತುದಾರರ ಸಂಖ್ಯೆ ಎಷ್ಟು; | ಕಳೆದ ಸಾಲಿನಲ್ಲಿ ಸದರಿ ವಸತಿ ನಿಲಯಗಳಲ್ಲಿ ಗುತ್ತಿಗೆ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ 55 ತರಬೇತುದಾರರು, ಮಾಸಿಕ ಸಂಚಿತ ವೇತನ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ 52 ತರಬೇತುದಾರರು ಸೇವೆ ಒದಗಿಸುತ್ತಿದ್ದಾರೆ. ತರಬೇತುದಾರರ ಮಂಜೂರಾದ ಖಾಯಂ ಹುದ್ದೆಗಳಲ್ಲಿ ಪ್ರಸ್ತುತ ಒಬ್ಬ ತರಬೇತುದಾರರು ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದಾರೆ. |
| ಉ | ಸದರಿಯವರಿಗೆ ನೀಡಲಾಗುತ್ತಿರುವ ಮಾಸಿಕ ವೇತನವೆಷ್ಟು; | ತರಬೇತುದಾರರಿಗೆ ನೀಡಲಾಗುತ್ತಿರುವ ಮಾಸಿಕ ವೇತನದ ವಿವರ ಈ ಕೆಳಕಂಡಂತಿದೆ:- (see table below) |
| ಊ | ಇದುವರೆಗೆ ಸದರಿ ತರಬೇತುದಾರರನ್ನು ಖಾಯಂಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಸದರಿ ನೌಕರರ ಸೇವಾ ಸಕ್ರಮಾತಿಗೆ ಸಂಬಂಧಿಸಿದಂತೆ ಸರ್ಕಾರವು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿದ್ದು, ಶ್ರೀಮತಿ ಉಮಾದೇವಿ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಸದರಿ ತರಬೇತುದಾರರ ಸೇವಾ ಸಕ್ರಮಾತಿ ಸಾಧ್ಯವಿರುವುದಿಲ್ಲ. |

| ಕ್ರ.ಸಂ. | ಹುದ್ದೆ | ಮಾಸಿಕ ಸಂಚಿತ ವೇತನ (ರೂ) |
|---|---|---|
| 1 | ಹಿರಿಯ ತರಬೇತುದಾರರು | 70,000 |
| 2 | ತರಬೇತುದಾರರು (ಪದವಿ ಮತ್ತು ಕ್ರೀಡಾ ತರಬೇತಿಯಲ್ಲಿ ಡಿಪ್ಲೊಮಾ) | 39,960 |
| 3 | ತರಬೇತುದಾರರು (ಕ್ರೀಡಾ ತರಬೇತಿಯಲ್ಲಿ ಡಿಪ್ಲೊಮಾ) | 31,050 |
| 4 | ಕಿರಿಯ ತರಬೇತುದಾರರು | 26,000 |

**ವೈಎಸ್ ಡಿ-/ಇಬಿಬಿ/98/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಅನುಬಂಧ-1

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಕ್ರೀಡಾ ವಸತಿ ಶಾಲೆ/ನಿಲಯಗಳ ವಿವರ

| ಕ್ರ ಸಂ | ಕ್ರೀಡಾ ವಸತಿ ಶಾಲೆ/ ನಿಲಯದ ಹೆಸರು |
|---|---|
| 1 | ಕ್ರೀಡಾ ವಸತಿ ಶಾಲೆ, ವಿದ್ಯಾನಗರ, ಬೆಂಗಳೂರು |
| 2 | ಕ್ರೀಡಾ ವಸತಿ ಶಾಲೆ, ಕೂಡಿಗೆ, ಕೊಡಗು |
| 3 | ಕ್ರೀಡಾ ವಸತಿ ನಿಲಯ, ಶ್ರೀ ಕಂಠೀರವ ಕ್ರೀಡಾಂಗಣ, ಬೆಂಗಳೂರು |
| 4 | ಕ್ರೀಡಾ ವಸತಿ ನಿಲಯ, ಮೈಸೂರು |
| 5 | ಕ್ರೀಡಾ ವಸತಿ ನಿಲಯ, ಬೆಳಗಾವಿ |
| 6 | ಕ್ರೀಡಾ ವಸತಿ ನಿಲಯ, ದಾವಣಗೆರೆ |
| 7 | ಕ್ರೀಡಾ ವಸತಿ ನಿಲಯ, ವಿಜಯಪುರ |
| 8 | ಕ್ರೀಡಾ ವಸತಿ ನಿಲಯ, ಚಿಕ್ಕಮಗಳೂರು |
| 9 | ಕ್ರೀಡಾ ವಸತಿ ನಿಲಯ, ಹಾವೇರಿ |
| 10 | ಕ್ರೀಡಾ ವಸತಿ ನಿಲಯ, ಮಡಿಕೇರಿ, ಕೊಡಗು |
| 11 | ಕ್ರೀಡಾ ವಸತಿ ನಿಲಯ, ಮಂಡ್ಯ |
| 12 | ಕ್ರೀಡಾ ವಸತಿ ನಿಲಯ, ರಾಯಚೂರು |
| 13 | ಕ್ರೀಡಾ ವಸತಿ ನಿಲಯ, ಮಂಗಳೂರು |
| 14 | ಕ್ರೀಡಾ ವಸತಿ ನಿಲಯ, ಹಾಸನ |
| 15 | ಕ್ರೀಡಾ ವಸತಿ ನಿಲಯ, ರಾಮನಗರ |
| 16 | ಕ್ರೀಡಾ ವಸತಿ ನಿಲಯ, ಚಿಕ್ಕಬಳ್ಳಾಪುರ |
| 17 | ಕ್ರೀಡಾ ವಸತಿ ನಿಲಯ, ಬಾಗಲಕೋಟೆ |
| 18 | ಕ್ರೀಡಾ ವಸತಿ ನಿಲಯ, ಶಿವಮೊಗ್ಗ |
| 19 | ಕ್ರೀಡಾ ವಸತಿ ನಿಲಯ, ಚಿತ್ರದುರ್ಗ |
| 20 | ಕ್ರೀಡಾ ವಸತಿ ನಿಲಯ, ಉಡುಪಿ |
| 21 | ಕ್ರೀಡಾ ವಸತಿ ನಿಲಯ, ಕಾರವಾರ, ಉತ್ತರ ಕನ್ನಡ |
| 22 | ಕ್ರೀಡಾ ವಸತಿ ನಿಲಯ, ಹಳಿಯಾಳ, ಉತ್ತರ ಕನ್ನಡ |
| 23 | ಕ್ರೀಡಾ ವಸತಿ ನಿಲಯ, ಧಾರವಾಡ |
| 24 | ಕ್ರೀಡಾ ವಸತಿ ನಿಲಯ, ಕಲಬುರಗಿ |
| 25 | ಕ್ರೀಡಾ ವಸತಿ ನಿಲಯ, ಬಳ್ಳಾರಿ |
| 26 | ಕ್ರೀಡಾ ವಸತಿ ನಿಲಯ, ಕೊಪ್ಪಳ |
| 27 | ಕ್ರೀಡಾ ವಸತಿ ನಿಲಯ, ಪೊನ್ನಂಪೇಟೆ, ಕೊಡಗು |
| 28 | ಕ್ರೀಡಾ ವಸತಿ ನಿಲಯ, ಸಂತೇಮರಳ್ಳಿ, ಚಾಮರಾಜನಗರ |
| 29 | ಕ್ರೀಡಾ ವಸತಿ ನಿಲಯ, ಚಾಮರಾಜನಗರ |
| 30 | ಕ್ರೀಡಾ ವಸತಿ ನಿಲಯ, ಗದಗ |
| 31 | ಕ್ರೀಡಾ ವಸತಿ ನಿಲಯ, ಕೋಲಾರ |
| 32 | ಕ್ರೀಡಾ ವಸತಿ ನಿಲಯ, ಬೀದರ್ |
| 33 | ಕ್ರೀಡಾ ವಸತಿ ನಿಲಯ, ತುಮಕೂರು |
| 34 | ಕ್ರೀಡಾ ವಸತಿ ನಿಲಯ, ಯಾದಗಿರಿ |